# ಕರ್ನಾಟಕ ವಿಧಾನ ಪರಿಷತ್ತು

1. **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :** 1942
2. **ಸದಸ್ಯರ ಹೆಸರು :** ಶ್ರೀ ಹೆಚ್.ಎಂ ರಮೇಶ ಗೌಡ
3. **ಉತ್ತರಿಸುವ ದಿನಾಂಕ :** 26/03/2020
4. **ಉತ್ತರಿಸುವ ಸಚಿವರು :** ಮುಖ್ಯ ಮಂತ್ರಿಗಳು

| ಪ್ರಶ್ನೆ | ಉತ್ತರ |
| --- | --- |
| ಅ) ಸರ್ಕಾರಿ ಇಲಾಖೆಗಳಲ್ಲಿ ಮಹಿಳಾ ನೌಕರರನ್ನು ಸಂಜೆ 6 ಘಂಟೆ ಯ ನಂತರ ಕೆಲಸ ಮಾಡಲು ಒತ್ತಾಯಿಸಬಾರದೆಂದು ಆದೇಶ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು. |
| ಆ) ಬಂದಿದ್ದಲ್ಲಿ ಸರ್ಕಾರದ ಹಲವಾರು ಇಲಾಖೆಗಳಲ್ಲಿ (ಮುಖ್ಯವಾಗಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ) ಸಂಜೆ 6.00 ರ ನಂತರವೂ ಮಹಿಳಾ ನೌಕರರಿಂದ ಕೆಲಸ ಮಾಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ವಿಧಾನ ಮಂಡಲದ ಅಧಿವೇಶನ / ಇತರೆ ಸಂದರ್ಭಗಳಲ್ಲಿ ಕೆಲಸದ ಹಿತದೃಷ್ಟಿಯಿಂದ ಮಹಿಳಾ ನೌಕರರು ಕಛೇರಿ ಸಮಯದ ನಂತರ ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಇ) ಬಂದಿದ್ದಲ್ಲಿ ಈ ರೀತಿ ಕೆಲಸ ಮಾಡಿಸುವುದನ್ನು ತಡೆಯಲು ಸರ್ಕಾರದಿಂದ ಯಾವ ಕ್ರಮ ಜರುಗಿಸಲಾಗಿದೆ? | ದಿನಾಂಕ 27.02.2017 ರ ಸುತ್ತೋಲೆಯಲ್ಲಿ ಸಚಿವಾಲಯದ ಮಹಿಳಾ ನೌಕರರಿಗೆ ಸಂಬಂಧಿಸಿದಂತೆ ಕಛೇರಿ ಸಮಯದ ನಂತರ ಕಾರ್ಯ ನಿರ್ವಹಿಸುತ್ತಿರುವವರಿಗೆ ಸೂಕ್ತ ವ್ಯವಸ್ಥೆ ಕಲ್ಪಿಸುವಂತೆ ಆಯಾಯ ಇಲಾಖೆಯ ಕಾರ್ಯದರ್ಶಿಗಳಿಗೆ ತಿಳಿಸಲಾಗಿದೆ (ಪ್ರತಿ ಲಗತ್ತಿಸಿದೆ)<br><br>ಇಲಾಖಾ ಮಟ್ಟದಲ್ಲಿ ಆಯಾಯ ಇಲಾಖಾ ಮುಖ್ಯಸ್ಥರು ಕಛೇರಿ ನಂತರ ಕರ್ತವ್ಯ ನಿರ್ವಹಿಸುವ ಮಹಿಳಾ ನೌಕರರಿಗೆ ಸೂಕ್ತ ವ್ಯವಸ್ಥೆ ಕಲ್ಪಿಸುವ ಜವಾಬ್ದಾರಿ ಹೊಂದಿರುತ್ತಾರೆ. |
| ಈ) ಸಂಜೆ 6 ಘಂಟೆ ನಂತರವೂ ಕೆಲಸ ಮಾಡುವಂತೆ ಒತ್ತಾಯಿಸುವ ಅಧಿಕಾರಿಗಳ ಮೇಲೆ ಸರ್ಕಾರ ಯಾವ ಕ್ರಮ ಕೈಗೊಳ್ಳುವುದು? | ಇಂಥಹ ಯಾವುದೇ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

**ಸಿಆಸುಇ 34 ಕತವ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯ ಮಂತ್ರಿಗಳು

ಕರ್ನಾಟಕ ಸರ್ಕಾರ

ಸಂಖ್ಯೆ: ... 11 ... 2014

ಕರ್ನಾಟಕ ಸರ್ಕಾರ ಸಚಿವಾಲಯ
6ನೇ ಮಹಡಿ, 1ನೇ ಗೇಟ್
ಬಹುಮಹಡಿ ಕಟ್ಟಡ
ಬೆಂಗಳೂರು,ದಿನಾಂಕ:27-02-2017

## ಸುತ್ತೋಲೆ

ವಿಷಯ: ಕಛೇರಿಯ ಸಮಯದ ನಂತರವೂ ಕಾರ್ಯನಿರ್ವಹಿಸುತ್ತಿರುವ ಸಚಿವಾಲಯದ ಮಹಿಳಾ ನೌಕರರಿಗೆ ಸಾರಿಗೆ ವ್ಯವಸ್ಥೆ ಕಲ್ಪಿಸುವ ಬಗ್ಗೆ.

----

ಸರ್ಕಾರಿ ನೌಕರರು ದಿನದ 24 ಗಂಟೆಗಳ ಕಾಲ ಸರ್ಕಾರಿ ಕೆಲಸ ನಿರ್ವಹಿಸಲು ಸಿದ್ಧರಾಗಿರಬೇಕಾಗಿರುತ್ತದೆ. ಸರ್ಕಾರಿ ಕಛೇರಿಯ ವೇಳೆಯು ಸಾಮಾನ್ಯವಾಗಿ ಪೂರ್ವಾಹ್ನ 10.00 ಘಂಟೆಯಿಂದ ಸಾಯಂಕಾಲ 5.30 ರವರೆಗೆ ಇರುವುದಾದರೂ ಅನೇಕ ಸಂದರ್ಭಗಳಲ್ಲಿ ಅದರಲ್ಲೂ ಮುಖ್ಯವಾಗಿ ವಿಧಾನ ಮಂಡಲದ ಅಧಿವೇಶನಗಳು/ ಇತರೆ ಸಭೆ ನಡೆಯುವಾಗ ಅಥವಾ ಇನ್ನಾವುದೇ ಸನ್ನಿವೇಶಗಳಲ್ಲಿ ಸಾಂದರ್ಭಿಕವಾಗಿ ಸರ್ಕಾರಿ ನೌಕರರು ಕಛೇರಿ ವೇಳೆಯ ನಂತರವೂ ಕಾರ್ಯನಿರ್ವಹಿಸುವ ಅನಿವಾರ್ಯತೆ ಇರುತ್ತದೆ. ಸಮಾನ ಕೆಲಸಕ್ಕೆ ಸಮಾನ ವೇತನ ಎನ್ನುವ ತತ್ವವು ಮಹಿಳಾ ನೌಕರರು ಸೇರಿದಂತೆ ಲಿಂಗ ತಾರತಮ್ಯವಿಲ್ಲದೇ ಎಲ್ಲ ಸರ್ಕಾರಿ ನೌಕರರಿಗೆ ಅನ್ವಯವಾಗುತ್ತದೆ.

ಇತ್ತೀಚೆಗೆ ಮಹಿಳಾ ಸರ್ಕಾರಿ ನೌಕರರ ಸಂಖ್ಯೆಯು ಶೇ.30 ಕ್ಕಿಂತ ಹೆಚ್ಚಾಗಿದ್ದು ಕೆಲವು ಇಲಾಖೆಗಳಲ್ಲಿ ಈ ಪ್ರಮಾಣವು ಶೇ.50 ರಷ್ಟಿದೆ. ಇತ್ತೀಚಿನ ದಿನಗಳಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು ಹೆಚ್ಚುತ್ತಿರುವುದನ್ನು ಪರಿಗಣಿಸಿ ಮಹಿಳಾ ಸರ್ಕಾರಿ ನೌಕರರ ರಕ್ಷಣೆಗೆ ಸಾಧ್ಯವಾದಷ್ಟು ಮಟ್ಟಿಗೆ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ಸಂಬಂಧಿಸಿ ಇಲಾಖಾ/ಕಛೇರಿ ಮುಖ್ಯಸ್ಥರು ತೆಗೆದುಕೊಳ್ಳುವುದು ಸೂಕ್ತವೆಂದು ಸರ್ಕಾರವು ಮನಗಂಡಿದೆ. ಅದರಂತೆ,

ಅ. ಅನಿವಾರ್ಯವಾಗಿ ಮಹಿಳಾ ಸರ್ಕಾರಿ ನೌಕರರು ಕಛೇರಿ ವೇಳೆಯ ನಂತರ ಕಛೇರಿಯಲ್ಲಿ ಇರಲೇಬೇಕಾದ ಪ್ರಸಂಗ ಒದಗಿ ಬಂದಲ್ಲಿ, ಸಾಧ್ಯವಾದಷ್ಟು ಕನಿಷ್ಠ ಸಂಖ್ಯೆಯಲ್ಲಿ ಮಹಿಳಾ ನೌಕರರನ್ನು ಕೆಲಸದಲ್ಲಿ ತೊಡಗಿಸುವುದು. ಕಛೇರಿ ವೇಳೆಯ ನಂತರ ಒಬ್ಬರೇ ಮಹಿಳಾ ನೌಕರರು ಕಛೇರಿಯಲ್ಲಿರುವುದನ್ನು ಸಾಧ್ಯವಾದಷ್ಟು ತಪ್ಪಿಸುವುದು. ಒಂದು ವೇಳೆ ಅವರು ಇರಲೇಬೇಕಾದ ಪ್ರಸಂಗ ಒದಗಿದಲ್ಲಿ ಕಛೇರಿಯಲ್ಲೂ ಸೂಕ್ತ ಭದ್ರತಾ ವ್ಯವಸ್ಥೆಯನ್ನು ಮಾಡಬೇಕು. ಮಾರನೇ ದಿನ ಈ ಕೆಲಸ ನಿರ್ವಹಿಸಲು ಅವಕಾಶವಿದ್ದಲ್ಲಿ ಮಾರನೇ ದಿನ ಬೆಳಿಗ್ಗೆ ಕಛೇರಿ ವೇಳೆಗಿಂತ ಮುನ್ನವೇ ಕಛೇರಿಗೆ ಬಂದು ಕೆಲಸ ನಿರ್ವಹಿಸಲು ಮಹಿಳಾ ಸಿಬ್ಬಂದಿಗೆ ಸೂಚಿಸಬಹುದು.

ಆ. ಕಛೇರಿಯಲ್ಲಿ ಸಾರಿಗೆ ಸೌಲಭ್ಯ ಲಭ್ಯವಿದ್ದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಕಛೇರಿಯಿಂದ ಮಹಿಳಾ ನೌಕರರಿಗೆ ಸಾಯಂಕಾಲ ಏಳು ಗಂಟೆಯ ನಂತರ ಮನೆ ತಲುಪಿಸುವ ವ್ಯವಸ್ಥೆ ಮಾಡುವುದು. ಇಲ್ಲದಿದ್ದಲ್ಲಿ ಸಾರಿಗೆ/ಪೊಲೀಸ್ ಇಲಾಖೆಗಳೊಡನೆ ವ್ಯವಹರಿಸಿ ಮಹಿಳಾ ನೌಕರರು ಸುರಕ್ಷತೆಯಿಂದ ಮನೆ ತಲುಪಿಸುವ ವ್ಯವಸ್ಥೆ ಮಾಡುವ ಬಗ್ಗೆ ಪರಿಶೀಲಿಸಬಹುದು.

ಇ. ವಿಧಾನ ಮಂಡಲದ ಅಧಿವೇಶನಗಳು ನಡೆಯುವಾಗ ಮುಂದಿನ ಕಾರ್ಯಕಲಾಪ ಪಟ್ಟಿಯನ್ನು ಈಗ ಅಂತರ್ಜಾಲದಲ್ಲಿ ಪಡೆಯುವ ಅವಕಾಶವಿದೆ. ಈ ಕಾರ್ಯಕಲಾಪ ಪಟ್ಟಿಯು 8.00 ಘಂಟೆಯ ನಂತರ ಲಭ್ಯವಾಗುವುದರಿಂದ ಇದನ್ನು ಪಡೆದು ವಿವಿಧ ಇಲಾಖೆಗಳಿಗೆ ಕಳುಹಿಸಿಕೊಡುವ ಕಾರ್ಯವನ್ನು ಮಹಿಳಾ ನೌಕರರಿಗೆ ವಹಿಸುವುದನ್ನು ತಪ್ಪಿಸಬಹುದು.

ಮೇಲಿನ ಸೂಚನೆಗಳು ಕೇವಲ ಸಲಹಾತ್ಮಕ ಸೂಚನೆಗಳಾಗಿವೆ. ಮಹಿಳಾ ನೌಕರರು ಹಕ್ಕೊತ್ತಾಯ ಮಾಡಿ ಈ ಸೂಚನೆಗಳನ್ನು ಅನುಸರಿಸಬೇಕೆಂದು ಮೇಲಧಿಕಾರಿಗಳ ಮೇಲೆ ಒತ್ತಡ ಹೇರಿ ಸರ್ಕಾರಿ ಕಾರ್ಯನಿರ್ವಹಣೆಗೆ ತೊಡಕು ತರುವುದನ್ನು ನಿಷೇಧಿಸಲಾಗಿದೆ.

(ಆರ್. ಶಿವಲಿಂಗಯ್ಯ)
ಸರ್ಕಾರದ ಜಂಟಿ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ ಸುಧಾರಣೆ)

ಗೆ:

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು.
2. ಸರ್ಕಾರದ ಅಪರ ಕಾರ್ಯದರ್ಶಿಗಳು/ಜಂಟಿ ಕಾರ್ಯದರ್ಶಿಗಳು/ಉಪ ಕಾರ್ಯದರ್ಶಿಗಳು/ ಅಧೀನ ಕಾರ್ಯದರ್ಶಿಗಳು / ಸಮನ್ವಯಾಧಿಕಾರಿಗಳು.

ಪ್ರತಿ:

1. ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು.
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರವರ ಆಪ್ತ ಕಾರ್ಯದರ್ಶಿಗಳು.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ(ಆಸು) ರವರ ಆಪ್ತ ಕಾರ್ಯದರ್ಶಿ.
5. ಸರ್ಕಾರದ ಜಂಟಿ ಕಾರ್ಯದರ್ಶಿ, ಸಿಆಸುಇ(ಆಸು)ರವರ ಆಪ್ತ ಸಹಾಯಕರು.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.